ಶ್ರೀಶಾನುದಾಸಗ್ರನ್ಥಮಾಲಾ— ಸ್ತೋತ್ರ ಶಾಖೆ ೧—ದಶಮಾನೋತ್ಸವ ಸ್ಮಾರಕ ಪ್ರಕಟನೆ

# ಭಾರತ ಕೃಷ್ಣ ಮಂಗಳಂ



ಹಾಡಿದವರು : ಶ್ರೀ. ಉ. ವೇ. ಸಾಹಿತ್ಯರತ್ನಂ ಜಗ್ಗು ವೆಂಕಟಾಚಾರ್ಯರು

ಗೀತಾಜಯಂತಿ—೧೯೫೬ ಬೆಲೆ : 0—3—0

# ಅರಿಕೆ

ಶ್ರೀರಾಮಾಯಣ ಪಾರಾಯಣವಾದ ಮೇಲೆ ರಾಮಮಂಗಳವನ್ನು ಪ್ರತಿ ದಿನವೂ ಹಾಡುವ ವಾಡಿಕೆ ಇದೆ. ಅದರಂತೆ ಇದುವರೆಗೆ ಮಹಾಭಾರತ ಪಾರಾಯಣದ ಕೊನೆಯಲ್ಲಿ ಹಾಡುವಂತಹ ಶ್ರೀಕೃಷ್ಣಮಂಗಳ ಇರಲಿಲ್ಲ. ಮಹಾಭಾರತದ ಪ್ರತಿ ಪರ್ವದ ಸಾರದೊಡನೆ ಶ್ರೀ ಕೃಷ್ಣನ ನಾಮಾಮೃತವನ್ನು ಸವಿಯುವಂತೆ 'ಭಾರತಕೃಷ್ಣಮಂಗಳ'ವನ್ನು ಯದುಗಿರಿಯ ಶ್ರೀ ಉ.ವೇ. ಸಾಹಿತ್ಯರತ್ನಂ ಜಗ್ಗು ವೆಂಕಟಾಚಾರ್ಯ ಸ್ವಾಮಿಗಳು ಹಾಡಿ ಪರಮೋಪಕಾರ ಮಾಡಿದಾರೆ. ಈ ಅಪೂರ್ವ ಕೃತಿರತ್ನವನ್ನು ಅವರ ಆಶಯದಂತೆ ಸಂಸ್ಕೃತದಲ್ಲಿಯೂ ಕನ್ನಡದಲ್ಲಿ ಸರಳಾನುವಾದದೊಡನೆಯೂ ಕರ್ಣಾಟಕಪ್ರಾಂತ ರಚನೆಯಾದ ಕೂಡಲೇ ಬಂದಿರುವ 'ಗೀತಾಜಯಂತೀ ಮಹೋತ್ಸವ'ದ ಈ ಶುಭದಿನದಲ್ಲಿ ಪ್ರಕಟಿಸಿ ನಾಡಿನ ಭಕ್ತ ಮಂಡಲಿಗೆ ಸಮರ್ಪಿಸಲು ಸಂತೋಷವಾಗುತ್ತದೆ.

ಅನುವಾದವನ್ನು ಪರಿಷ್ಕರಿಸಿ ಉಪಕರಿಸಿದ ಶ್ರೀಪಂಡಿತ ಹೆಮ್ಮಿಗೆ ದೇಶಿಕಾಚಾರ್ಯರಿಗೂ ಇದನ್ನು ಪ್ರಕಟಿಸಲು ಅನುಮತಿಯಿತ್ತ ಕವಿವರ್ಯರಿಗೂ ರಕ್ಷಾಪತ್ರದಲ್ಲಿ ಬೆಳಗುವ ಭಗವಾನ್ ಪಾರ್ಥಸಾರಥಿಯ ಪಡಿಯಚ್ಚನ್ನು ಕಳುಹಿಸಿಕೊಟ್ಟು ಉಪಕರಿಸಿದ ಮದರಾಸಿನ "ಭಕ್ತನ್" ಸಂಪಾದಕರಿಗೂ ಈ ಪುಸ್ತಕವನ್ನು ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಬೆಂಗಳೂರಿನ ಜ್ಯೂಪಿಟರ್ ಪ್ರೆಸ್ ಒಡೆಯರಿಗೂ ಕೃತಜ್ಞತೆಯ ಧನ್ಯವಾದಗಳು.

ಮಹಾಭಾರತವನ್ನು ಆದರಿಸುವವರೆಲ್ಲರೂ ಈ ಭಾರತಕೃಷ್ಣಮಂಗಳವನ್ನು ಕಲಿತು ದಿನವೂ ಹಾಡಿ ಧನ್ಯರಾಗುವಂತೆ ಶ್ರೀ ಕೃಷ್ಣನು ಅನುಗ್ರಹಿಸಲಿ!

ಬೆಂಗಳೂರು, 12-11-56
ದುರ್ಮುಖಿ ಮಾರ್ಗಶಿರಶುದ್ಧ
ಏಕಾದಶೀ

ಆ. ನ. ಶ್ರೀ.
—ಅನುವಾದಕ.

# ಭಾರತ ಕೃಷ್ಣ ಮಂಗಳಂ

ರಚಿಸಿದವರು: ಶ್ರೀ ಉ. ವೇ. ಸಾಂಖ್ಯತೀರ್ಥ ವೇದಾನ್ತ ವಿದ್ವಾನ್ ಸಾಹಿತ್ಯ ರತ್ನಂ ಜಗ್ಗು ವೆಂಕಟಾಚಾರ್ಯರು, ಮೇಲುಕೋಟೆ.

ಅನುವಾದಕರು: ಅ. ನ. ಶ್ರೀನಿವಾಸ್ಯೆಯಂಗಾರ್, ಶ್ರೀಶಾನುದಾಸ ಗ್ರನ್ಥಮಾಲಾ.



## ಆದಿಪರ್ವ

ಅನುಗ್ರಹಾಯ ಭಕ್ತಾನಾಂ ತದ್ವಿಷಾಂ ನಿಗ್ರಹಾಯಚ ।
ಅವತೀರ್ಣಾಯ ಭೂಭಾಗೇ ವಾಸುದೇವಾಯ ಮಂಗಳಂ ॥ ೧ ॥
ಅಜಾನಕ್ಲೇಶಮಗ್ನಾಸ್ತೇ ಕೌಂತೇಯಾ ಯತ್ಪ್ರಸಾದತಃ ।
ಕೃಷ್ಣಾಂ ರಾಜ್ಯಂ ಸುಖಂ ಚಾಪುಃ ತಸ್ಮೈ ಕೃಷ್ಣಾಯ ಮಂಗಳಂ ॥ ೨ ॥

### ಅನುವಾದ

ಭಕ್ತರನ್ನು ಅನುಗ್ರಹಿಸುವುದಕ್ಕಾಗಿಯೂ ಅವರ ಹಗೆಗಳನ್ನು ನಿಗ್ರಹಿಸುವುದಕ್ಕಾಗಿಯೂ ಭೂಮಿಯಲ್ಲಿ ಅವತರಿಸಿದ ವಾಸುದೇವನಿಗೆ ಮಂಗಳವಾಗಲಿ! ಹುಟ್ಟಿದದಿನದಿಂದಲೂ ಕ್ಲೇಶದಲ್ಲಿ ಮುಳುಗಿದ್ದ ಕುಂತಿಯ ಮಕ್ಕಳು ಯಾರ ಅನುಗ್ರಹದಿಂದ ದ್ರೌಪದಿಯನ್ನೂ ರಾಜ್ಯವನ್ನೂ ಸುಖವನ್ನೂ ಹೊಂದಿದರೋ ಆ ಕೃಷ್ಣನಿಗೆ ಮಂಗಳವಾಗಲಿ!

## ಸಭಾಪರ್ವ

ಸರ್ವಕರ್ಮಸಮಾರಾಧ್ಯಃ ತದ್ವಿಘ್ನವಿನಿವರ್ತಕಃ ।
ಭಕ್ತಾಂಘ್ರಿಶೋಧಕೋಯಶ್ಚ ತಸ್ಮೈಕೃಷ್ಣಾಯಮಂಗಳಂ॥ ॥ ೩ ॥
ಸನಾಥಾಪಿವಿನಾಥೇವ ಕೃಷ್ಣಾ ಕೃಷ್ಣಾ ಸಭಾಂತರೇ ।
ಯನ್ನಾಮಕೀರ್ತನಾತ್ ತ್ರಾತಾ ತಸ್ಮೈಕೃಷ್ಣಾಯ ಮಂಗಳಂ॥ ॥ ೪ ॥

### ಅನುವಾದ

ಎಲ್ಲಾ ಸತ್ಕಾರ್ಯಗಳಿಂದಲೂ ಸಂತೋಷಪಡುವ 'ಸರ್ವಕರ್ಮ ಸಮಾರಾಧ್ಯ' ನಾದ, ಸತ್ಕರ್ಮಗಳಿಗೆ ಬರುವ ಅಡ್ಡಿಗಳನ್ನು ಪರಿಹರಿಸುವ, ಭಕ್ತರ

ಪಾದಗಳನ್ನು ತೊಳೆಯುವ ಕೃಷ್ಣನಿಗೆ ಮಂಗಳವು! ಐವರು ಪತಿಗಳಿದ್ದರೂ ಸಭೆಯಲ್ಲಿ ಅನಾಥೆಯಂತೆ ಎಳೆದೊಯ್ಯಲ್ಪಟ್ಟ ದ್ರೌಪದಿಯನ್ನು ಯಾರ ನಾಮ ಸಂಕೀರ್ತನವು ಸಂರಕ್ಷಿಸಿತೋ ಆ ಕೃಷ್ಣನಿಗೆ ಮಂಗಳವು!

## ವನಪರ್ವ

ಪಾರ್ಥೇಭ್ಯೋ ವನವಾಸಿಭ್ಯೋ ದ್ರೋಗ್ಧುಂ ದುರ್ಯೋಧನೇರಿತಃ।
ನಿರಸ್ತೋ ಯೇನ ದುರ್ವಾಸಾಃ ತಸ್ಮೈಕೃಷ್ಣಾಯ ಮಂಗಳಂ॥ ॥೫॥

## ಅನುವಾದ

ವನವಾಸ ಮಾಡುತ್ತಿದ್ದ ಪಾಂಡವರಿಗೆ ದುರ್ಯೋಧನನ ಪ್ರೇರಣೆಯಂತೆ ತೊಂದರೆ ಕೊಡಲು ಬಂದ ದುರ್ವಾಸ ಮುನಿಯು ಯಾರಿಂದ ನಿವಾರಿತನಾದನೋ ಆ ಕೃಷ್ಣನಿಗೆ ಮಂಗಳವು!

## ವಿರಾಟಪರ್ವ

ಅಜ್ಞಾತವಾಸನಿಶ್ಶ್ರೀಕಾಃ ಪಾರ್ಥಾಯದ್ದತ್ತಸಂಪದಾ।
ಸೌಭದ್ರೋಪಯಮಂ ಚಕ್ರುಃ ತಸ್ಮೈ ಕೃಷ್ಣಾಯ ಮಂಗಳಂ॥ ॥೬॥

## ಅನುವಾದ

ಐಶ್ವರ್ಯವನ್ನು ಕಳೆದುಕೊಂಡು ಅಜ್ಞಾತವಾಸ ಮಾಡುತ್ತಿದ್ದ ಪಾಂಡವರು ಯಾರು ಅನುಗ್ರಹಿಸಿದ ಸಂಪತ್ತಿನಿಂದ ಅಭಿಮನ್ಯುವಿಗೆ ಮದುವೆಯನ್ನು ಮಾಡಿದರೋ ಆ ಕೃಷ್ಣನಿಗೆ ಮಂಗಳವು!

## ಉದ್ಯೋಗಪರ್ವ

ಸೌಲಭ್ಯಪರಿಪೂರ್ಣಾಯ ಪರಾತ್ಪರತರಾಯ ಚ।
ದೂತಾಯ ಪಾಂಡುಪುತ್ರಾಣಾಂ ಸಿದ್ಧಧರ್ಮಾಯ ಮಂಗಳಂ ॥೭॥

## ಅನುವಾದ

ಪರಾತ್ಪರನಾದರೂ ಭಕ್ತಪರಾಧೀನನಾಗಿ, ಪಾಂಡವರ ದೂತನಾಗಿ 'ಸೌಲಭ್ಯ ಪರಿಪೂರ್ಣ' ನೆನಿಸಿಕೊಂಡ ಸಿದ್ಧಧರ್ಮಸ್ವರೂಪಿಯಾದ ಆ ಕೃಷ್ಣನಿಗೆ ಮಂಗಳವು!

## ಭೀಷ್ಮಪರ್ವ

ಸರ್ವಶಾಸ್ತ್ರಮಯೀಂ ಗೀತಾಂ ಯೋದದಾಬಂಧಮುಕ್ತಯೇ ।
ಪಾರ್ಥವ್ಯಾಜೇನ ನಃ ತಸ್ಮೈ ಪಾರ್ಥಸೂತಾಯ ಮಂಗಳಂ ॥ ॥ ೮ ॥
ಭೀಷ್ಮಬಾಣಾತಿವಿದ್ಧಾಯ ಕ್ರುದ್ಧಾಯಾಪ್ಲುತ್ಯ ಧಾವತೇ ।
ಸ್ವಿನ್ನಾಯ ಚಕ್ರಹಸ್ತಾಯ ಧೂಲಿಧೂಸರಪಕ್ಷ್ಮಣೇ ॥ ॥ ೯ ॥
ಸ್ರಸ್ತಪೀತಾಂಬರದಶಾಂ ಕರ್ಷತೋ ಭೂತಲೇ ಮುಹುಃ ।
ಪರಿಷ್ಟುತಾಯ ಭೀಷ್ಮೇಣ ಫುಲ್ಲಪಂಕಜ ಚಕ್ಷುಷೇ ॥ ॥ ೧೦ ॥
ಪಾರ್ಥೇನ ಪುನರಾನೀಯ ಸ್ಥಾಪಿತಾಯ ನಿಜೇ ರಥೇ ।
ಘಾತಯಿತ್ರೇಽಥ ಭೀಷ್ಮಸ್ಯ ಮೇಘಶ್ಯಾಮಾಯ ಮಂಗಳಂ ॥ ॥ ೧೧ ॥

### ಅನುವಾದ

ಸಕಲ ಶಾಸ್ತ್ರಗಳ ಸಾರವಾದ ಗೀತೆಯನ್ನು ಪಾರ್ಥನ ನೆಪದಿಂದ ನಮ್ಮ ಬಂಧಮುಕ್ತಿಗಾಗಿ ಕೊಟ್ಟ ಆ ಪಾರ್ಥಸಾರಥಿಗೆ ಮಂಗಳವು! ಭೀಷ್ಮರ ಬಾಣದಿಂದ ಬಹಳವಾಗಿ ನೊಂದು, ಕೋಪಿಸಿಕೊಂಡು, ಕೈಯಲ್ಲಿ ಚಕ್ರವನ್ನು ಹಿಡಿದುಕೊಂಡು, ತೇರಿನಿಂದಿಳಿದು ಅವರ ಬಳಿಗೆ ಬೆವರುಹನಿಗಳಿಂದ ಸುಂದರನಾಗಿ ಓಡಿಬಂದ, ಧೂಳಿನಿಂದ ಮಲಿನವಾದ ರೆಪ್ಪೆಗಳನ್ನುಳ್ಳ ಫುಲ್ಲಾರವಿಂದ ನಯನನಿಗೆ ಮಂಗಳವು! ಹಾಗೆ ಬರುವಾಗ ನೆಲಕ್ಕೆ ಜಾರಿಬಿದ್ದ ಪೀತಾಂಬರದ ಸೆರಗನ್ನು ಪದೇ ಪದೇ ಎಳೆದುಕೊಳ್ಳುತ್ತಿರುವಂತೆಯೇ ಭೀಷ್ಮರಿಂದ ಸಂಸ್ತುತನಾದ, ಬಳಿಕ ಅರ್ಜುನನಿಂದ ಅವನ ರಥದಲ್ಲಿ ಸ್ಥಾಪಿಸಲ್ಪಟ್ಟಮೇಲೆ ಭೀಷ್ಮರನ್ನು ಗಾಸಿಗೊಳಿಸಿದ ಮೇಘಶ್ಯಾಮನಿಗೆ ಮಂಗಳವು!

## ದ್ರೋಣಪರ್ವ

ಅತಿಶ್ರಾನ್ತಾನ್ ಪಾರ್ಥರಥ್ಯಾನ್ ಮಧ್ಯಾಹ್ನೇ ಯುದ್ಧಮಧ್ಯಗಾನ್ ।
ಪಶ್ಯತ್ಸು ಸರ್ವವೀರೇಷು ಸರೋ ನಿರ್ಮಾಪ್ಯ ನಿರ್ಮಲಂ ॥ ॥ ೧೨ ॥
ಸಂಸ್ನಾಪ್ಯ ಪಾಯಯಿತ್ವಾಚ ನೀರುಜಾನಕರೋತ್ತು ಯಃ ।
ಸರ್ವಸಂಮೋಹಕಾಯಾಸ್ತು ತಸ್ಮೈ ಕೃಷ್ಣಾಯ ಮಂಗಳಂ ॥ ॥ ೧೩ ॥
ಪಿಧಾಯಭಾನುಂ ಚಕ್ರೇಣ ರಾತ್ರೀಕೃತ್ಯ ದಿನಂ ತು ಯಃ ।
ಅಮಾರಯತ್ ಸಿಂಧುರಾಜಂ ತಸ್ಮೈ ಕೃಷ್ಣಾಯ ಮಂಗಳಂ॥ ॥ ೧೪ ॥
ಘಾತಿನೀಂ ಏಕವೀರಸ್ಯ ಶಕ್ತಿಂ ಸಂಪ್ರಾರ್ಥ್ಯವಾಸವಾತ್ ।
ಲಬ್ಧಾಂ ಕರ್ಣೇನ ಸುಚಿರಾತ್ ರಕ್ಷಿತಾಂ ಹನ್ತುಮರ್ಜುನಂ ॥ ॥ ೧೫ ॥

ಹೈಡಿಂಬೇಯೇ ಯಾತುಧಾನೇ ರಾತ್ರಿಯುದ್ಧೇ ಘಟೋತ್ಕಚೇ ।
ಪಾತಯಿತ್ವಾರ್ಜುನಂ ಗೋಪ್ತ್ರೇ ತಸ್ಮೈ ಕೃಷ್ಣಾಯ ಮಂಗಳಂ ॥ ೧೬ ॥
ಪ್ರಯುಕ್ತೇ ಭಗದತ್ತೇನ ವೈಷ್ಣವಾಸ್ತ್ರೇಽರ್ಜುನಂಪ್ರತಿ ।
ಯಃ ಸ್ವೋರಸಾದಧಾನಾಶು ತಸ್ಮೈ ಕೃಷ್ಣಾಯ ಮಂಗಳಂ ॥ ॥ ೧೭ ॥
ಅಶ್ವತ್ಥಾಮವಧಂ ದ್ರೋಣಂ ಶ್ರಾವಯಿತ್ವಾಯುಧಿಷ್ಠಿರಾತ್ ।
ಯೋಽಘಾತಯತ್ ಸ್ವಾಶ್ರಿತಾರ್ಥೇ ತಸ್ಮೈ ಕೃಷ್ಣಾಯ ಮಂಗಳಂ ॥ ೧೮ ॥
ನಾರಾಯಣಾಸ್ತ್ರಾತ್ ಯೋ ದ್ರೌಣಿ ಪ್ರಯುಕ್ತಾತ್ ಸರ್ವಸೈನಿಕಾನ್ ।
ರರಕ್ಷ ಕ್ಷಿಪ್ತಸಾಮಗ್ರೀನ್ ತಸ್ಮೈ ಕೃಷ್ಣಾಯ ಮಂಗಳಂ ॥ ॥ ೧೯ ॥

## ಅನುವಾದ

ಯುದ್ಧದ ಮಧ್ಯದಲ್ಲಿ ನಡುಹಗಲಿನಲ್ಲಿ ಬಹಳವಾಗಿ ಬಳಲಿದ್ದ ಪಾರ್ಥನ ಕುದುರೆಗಳಿಗೆ, ಎಲ್ಲವೀರರೂ ನೋಡುತ್ತಿರುವಂತೆಯೇ, ಒಂದು ನಿರ್ಮಲವಾದ ಕೊಳವನ್ನು ನಿರ್ಮಿಸಿ ಅದರಲ್ಲಿ ಸ್ನಾನಮಾಡಿಸಿ ನೀರುಕುಡಿಸಿ ಅವುಗಳು ಆರೋಗ್ಯವಾಗಿರುವಂತೆ ಮಾಡಿದ ಸರ್ವಸಂಮೋಹಕನಾದ ಕೃಷ್ಣನಿಗೆ ಮಂಗಳವು! ಚಕ್ರದಿಂದ ಸೂರ್ಯನನ್ನು ಮರೆಸಿ ಹಗಲನ್ನು ಇರುಳೆನಿಸಿ ಸಿಂಧುರಾಜನನ್ನು ಕೊಲ್ಲಿಸಿದ ಕೃಷ್ಣನಿಗೆ ಮಂಗಳವು! ಇಂದ್ರನನ್ನು ಪ್ರಾರ್ಥಿಸಿ ಪಡೆದು, ಅರ್ಜುನನನ್ನು ಕೊಲ್ಲಬೇಕೆಂದು ಕರ್ಣನು ಬಹಳ ಕಾಲ ರಕ್ಷಿಸಿದ್ದ, ಎಂತಹ ವೀರನನ್ನೂ ಕೊಲ್ಲಬಲ್ಲ ಶಕ್ತ್ಯಾಯುಧವನ್ನು ರಾತ್ರಿಯುದ್ಧದಲ್ಲಿ ರಾಕ್ಷಸಿಯಾದ ಹಿಡಿಂಬೆಯ ಮಗನಾದ ಘಟೋತ್ಕಚನಮೇಲೆ ಬೀಳಿಸಿ ಅರ್ಜುನನನ್ನು ರಕ್ಷಿಸಿದ ಕೃಷ್ಣನಿಗೆ ಮಂಗಳವು! ಭಗದತ್ತನು ಅರ್ಜುನನನ್ನು ಕುರಿತು ಪ್ರಯೋಗಿಸಿದ ವೈಷ್ಣವಾಸ್ತ್ರವನ್ನು ಒಡನೇ ತನ್ನೆದೆಯಲ್ಲಿ ಧರಿಸಿದ ಕೃಷ್ಣನಿಗೆ ಮಂಗಳವು! ತನ್ನ ಆಶ್ರಿತನಿಗಾಗಿ ಅಶ್ವತ್ಥಾಮವಧವಾಯಿತೆಂದು ಯುಧಿಷ್ಠಿರನೆಂದಂತೆ ಕೇಳುವಹಾಗೆ ಮಾಡಿ ದ್ರೋಣನನ್ನು ಕೊಲ್ಲಿಸಿದ ಕೃಷ್ಣನಿಗೆ ಮಂಗಳವು! ಅಶ್ವತ್ಥಾಮನು ಪ್ರಯೋಗಿಸಿದ ನಾರಾಯಣಾಸ್ತ್ರದಿಂದ ಆಯುಧಗಳನ್ನೆಲ್ಲಾ ಎಸೆಯಿಸಿ ಸೈನಿಕರನ್ನೆಲ್ಲ ರಕ್ಷಿಸಿದ ಕೃಷ್ಣನಿಗೆ ಮಂಗಳವು!

## ಕರ್ಣಪರ್ವ

ಕರ್ಣಬಾಣಾತಿವಿದ್ಧೇನ ಸುಪ್ತೇನ ಶಿಬಿರೇ ಸ್ವಕೇ ।
ಧರ್ಮಪುತ್ರೇಣ ಗಾಂಡೀವೇ ನಿಂದಿತೇ ಧನುಷಿ ಸ್ವಕೇ ॥ ॥ ೨೦ ॥
ಸ್ವಪ್ರತಿಜ್ಞಾನುಸಾರೇಣಚ್ಛೇತ್ತುಂ ಯೌಧಿಷ್ಠಿರಂ ಶಿರಃ ।

ಉದ್ಯತಾಸಿಂತುವಿಜಯಂ ಸೂಕ್ಷ್ಮಥರ್ಮೋಪದೇಶತಃ ॥ ॥ ೨೧ ॥
ಸಮಾಧಾಯಾಗ್ರಜಸ್ಯಾಪಿ ಧಿಕ್ಕಾರಂ ಸ್ವಾತ್ಮನಃ ಸ್ತುತಿಂ ।
ಯಃಕಾರಯಿತ್ವಾಽರಕ್ಷತ್ ದ್ವೌತಸ್ಮೈಕೃಷ್ಣಾಯಮಂಗಳಂ ॥ ॥ ೨೨ ॥
ಕರ್ಣಪ್ರಯುಕ್ತೇ ಸಾರ್ಪೇಽಸ್ತ್ರೇ ಕಂಠಮುದ್ದಿಶ್ಯವಾಸವೇಃ ।
ರಥಮಾಕ್ರಮ್ಯಭಾರೇಣ ಪಾತಯಿತ್ವಾಥಜಾಸುನಾ ॥ ॥ ೨೩ ॥
ವಾಹಾನ್ ಕಿರೀಟಮಾತ್ರಂಯೋ ಹಾರಯಿತ್ವಾ ರರಕ್ಷ ತಂ ।
ಸಮಯೋಚಿತಧೀಭೂಮ್ನೇ ತಸ್ಮೈಕೃಷ್ಣಾಯ ಮಂಗಳಂ ॥ ॥ ೨೪ ॥
ರಥಚಕ್ರಂಭುವಾಗ್ರಸ್ತಂ ಉದ್ಧರನ್ತಂ ರವೇಸ್ಸುತಂ ।
ಅನಿಚ್ಛತಾಪಿ ಪಾರ್ಥೇನ ಘಾತಯಿತ್ರೇಽಸ್ತುಮಂಗಳಂ ॥ ॥ ೨೫ ॥

## ಅನುವಾದ

ಕರ್ಣನ ಬಾಣದಿಂದ ಬಹಳವಾಗಿ ನೋವುಪಟ್ಟು ತನ್ನ ಶಿಬಿರದಲ್ಲಿ ಮಲಗಿದ್ದ ಯುಧಿಷ್ಠಿರನು ಗಾಂಡೀವವನ್ನು ನಿಂದಿಸಲು, ಆಗ ತನ್ನ ಪ್ರತಿಜ್ಞೆಯಂತೆ ಯುಧಿಷ್ಠಿರನ ತಲೆಯನ್ನು ಕತ್ತರಿಸಲು ಕತ್ತಿಯನ್ನು ಮೇಲಕ್ಕೆತ್ತಿದ್ದ ಅರ್ಜುನನಿಗೆ ಧರ್ಮಸೂಕ್ಷ್ಮವನ್ನು ಉಪದೇಶಿಸಿ ಸಮಾಧಾನಪಡಿಸಿ ಅವನು ಅಣ್ಣನನ್ನು ಧಿಕ್ಕರಿಸುವಂತೆಯೂ ಸ್ವಪ್ರಶಂಸೆ ಮಾಡುವಂತೆಯೂ ಪ್ರೇರಿಸಿ ಅವರಿಬ್ಬರನ್ನೂ ರಕ್ಷಿಸಿದ ಕೃಷ್ಣನಿಗೆ ಮಂಗಳವು !

ಅರ್ಜುನನ ಕತ್ತಿಗೆ ಗುರಿಯಿಟ್ಟು ಕರ್ಣನು ಸರ್ಪಾಸ್ತ್ರವನ್ನು ಪ್ರಯೋಗಿಸಿದಾಗ ತೇರನ್ನು ತನ್ನ ಭಾರದಿಂದ ಅದುಮಿ ಕುದುರೆಗಳನ್ನು ಮೊಣಕಾಲೂರಿ ಬೀಳುವಂತೆ ಮಾಡಿ ಅರ್ಜುನನ ಕಿರೀಟವನ್ನು ಮಾತ್ರ ಹಾರುವಂತೆ ಮಾಡಿ ಅವನನ್ನು ರಕ್ಷಿಸಿದ ಸಮಯೋಚಿತಧೀಪೂರ್ಣನಾದ ಕೃಷ್ಣನಿಗೆ ಮಂಗಳವು ! ಹಿಂದೆಗೆಯುತ್ತಿದ್ದ ಅರ್ಜುನನನ್ನು ಪ್ರಚೋದಿಸಿ ನೆಲವು ನುಂಗಿದ ತೇರಿನ ಗಾಲಿಯನ್ನು ಎತ್ತುತ್ತಿದ್ದ ಕರ್ಣನಿಗೆ ನಿರ್ಯಾಣವನ್ನುಂಟುಮಾಡಿದ ಕೃಷ್ಣನಿಗೆ ಮಂಗಳವು !

## ಶಲ್ಯಪರ್ವ

ಬಲಕ್ಷಯಾತ್ ಹ್ರದೇಮಗ್ನಂ ಉತ್ಥಾಪ್ಯ ಷ ಸುಯೋಧನಂ ।
ಮರ್ಯಾದಾಮಪ್ರತಿಕ್ರಮ್ಯ ಭೀಮೇನಗದಯಾಮ್ಮೃಥೇ ॥ ॥೨೬॥

ಸಂಜ್ಞಾಪ್ಯಭೇದಯಾಮಾಸ ಯಸ್ಸುಯೋಧನ ಸಕ್ಥಿನೀ ।
ಭೀಮಸಂಧಾಸಮಾಧಾತ್ರೇ ತಸ್ಮೈಕೃಷ್ಣಾಯಮಂಗಳಂ ॥ ॥ ೨೭ ॥
ಅಷ್ಟಾದಶೇsಹನಿರಣೇ ಪೂರ್ಣೇಶಿಬಿರಮಾಗತೇ ।
ಸಾಯಂರಥೇಪೂರ್ವಮೇವ ಯೋವತಾರ್ಯಾರ್ಜುನಂತತಃ ॥ ॥ ೨೮ ॥
ಅವಪ್ಲುತ್ಯರಥಾತ್ತಸ್ಮಾತ್ ಸಾಶ್ವಾತ್ ಭಸ್ಮೀಕೃತಾತ್ ಕ್ಷಣಾತ್ ।
ರರಕ್ಷಾರ್ಜುನಮೇಕಾಗ್ರಃ ತಸ್ಮೈಕೃಷ್ಣಾಯ ಮಂಗಳಂ ॥ ॥ ೨೯ ॥

ಅನುವಾದ

ಬಲಗುಂದಿ ಕೊಳದಲ್ಲಿ ಮುಳುಗಿದ್ದ ದುರ್ಯೋಧನನನ್ನು ಭೀಮನಿಂದ ಎಬ್ಬಿಸಿ ಗದ್ಧಾಯುದ್ಧದಲ್ಲಿ ಮೇರೆಮೀರುವಂತೆಮಾಡಿ ಸಂಜ್ಞೆಮಾಡಿ ದುರ್ಯೋಧನನ ತೊಡೆಗಳನ್ನು ಭೇದಿಸಿ ಭೀಮನ ಪ್ರತಿಜ್ಞೆಯನ್ನುಳಿಸಿದ ಕೃಷ್ಣನಿಗೆ ಮಂಗಳವು! ಹದಿನೆಂಟನೆಯ ದಿನ ಯುದ್ಧ ಮುಗಿದಮೇಲೆ ಸಂಜೆಯಲ್ಲಿ ಶಿಬಿರಕ್ಕೆ ಬಂದಾಗ ಅರ್ಜುನರಕ್ಷಣೈಕದೀಕ್ಷಿತನಾಗಿ ಮೊದಲು ಅವನನ್ನಿಳಿಸಿ ತಾನಿಳಿದ ಮರುಕ್ಷಣದಲ್ಲಿಯೇ ಕುದುರೆಯೊಡನೆ ರಥವು ಬೂದಿಯಾದುದನ್ನು ತೋರಿದ (ಅದ್ಭುತ ಮಹಿಮನಾದ) ಕೃಷ್ಣನಿಗೆ ಮಂಗಳವು!

## ಸೌಪ್ತಿಕಪರ್ವ

ವರಾತ್ ರುದ್ರಸ್ಯ ಸರ್ವಸ್ಮಿನ್ನಿಶಿಸುಪ್ತೇ ಬಲೇ ಹತೇ ।
ದ್ರೌಣಿನಾನಿಶಿಪಂಚಾನಾಂ ರಕ್ಷಕಾಯಾಸ್ತುಮಂಗಳಂ ॥ ॥ ೩೦ ॥

ಅನುವಾದ

ರುದ್ರನ ವರವನ್ನು ಪಡೆದ ಅಶ್ವತ್ಥಾಮನಿಂದ ರಾತ್ರಿಯಲ್ಲಿ ಮಲಗಿದ್ದ ಸೈನ್ಯವೆಲ್ಲಾ ಹತವಾದ ಸನ್ನಿವೇಶದ ಆ ಇರುಳಿನಲ್ಲಿ ಪಂಚಪಾಂಡವರನ್ನೂ ರಕ್ಷಿಸಿದ ಕೃಷ್ಣನಿಗೆ ಮಂಗಳವು!

## ಸ್ತ್ರೀಪರ್ವ

ಭೀಮಂ ನಿರಸ್ಯ ಪ್ರಣತಂ ಆಯಸಂತಂ ನಿಧಾಯಯಃ ।
ರರಕ್ಷಭೀಮಂ ಜಾತ್ಯಂಧಾತ್ ತಸ್ಮೈಕೃಷ್ಣಾಯಮಂಗಳಂ ॥ ॥ ೩೧ ॥

ಅನುವಾದ

ಹುಟ್ಟುಕುರುಡನಾದ ಧೃತರಾಷ್ಟ್ರನಿಗೆ ನಮಿಸಲುಹೋದ ಭೀಮನನ್ನು ದೂರತಳ್ಳಿ ಅವನ ಆಕಾರದ ಕಬ್ಬಿಣದ ಪ್ರತಿಮೆಯನ್ನು ಮುಂದೆನೂಕಿ ಭೀಮನನ್ನು ಸಂರಕ್ಷಿಸಿದ ಕೃಷ್ಣನಿಗೆ ಮಂಗಳವಾಗಲಿ!

## ಶಾನ್ತಿಪರ್ವ

ಶರತಲ್ಪಗತಾತ್ ಭೀಷ್ಮಾತ್ ಅಶಕ್ತಾದಪಿಶಕ್ತಿದಃ ।
ಯೋಽಶ್ರಾವಯತ್ ಸರ್ವಧರ್ಮಾನ್ ತಸ್ಮೈಕೃಷ್ಣಾಯಮಂಗಳಂ॥೩೨॥

### ಅನುವಾದ

ಬಾಣದ ಹಾಸಿಗೆಯಲ್ಲಿ ಅಶಕ್ತನಾಗಿ ಮಲಗಿದ್ದ ಭೀಷ್ಮನಿಗೆ ಶಕ್ತಿಯನ್ನಿತ್ತು ಅವನಿಂದ ಸಕಲಧರ್ಮಗಳನ್ನೂ ಹೇಳಿಸಿದ ಆ ಕೃಷ್ಣನಿಗೆ ಮಂಗಳವು!

## ಆನುಶಾಸನಿಕಪರ್ವ

ಏಕಾದಶೀವ್ರತಂಸ್ವಸ್ಯ ನಾಮ್ನಾಂ ಅಪಿಸಹಸ್ರಕಂ।
ಅವಾಚಯದ್ಯೋಭೀಷ್ಮೇಣ ತಸ್ಮೈಕೃಷ್ಣಾಯಮಂಗಳಂ ॥ ॥೩೩॥

### ಅನುವಾದ

(ಧರ್ಮರಾಜನಿಗೆ) ಏಕಾದಶೀ ವ್ರತದ ಮಹಿಮೆಯನ್ನೂ ತನ್ನ ಸಾಸಿರ ನಾಮಗಳನ್ನೂ ಭೀಷ್ಮನಿಂದ ಹೇಳಿಸಿದ ಆ ಕೃಷ್ಣನಿಗೆ ಮಂಗಳವಾಗಲಿ !

## ಆಶ್ವಮೇಧಿಕಪರ್ವ

ದ್ರೌಣಿಬ್ರಹ್ಮಾಸ್ತ್ರ ನಿರ್ದಗ್ಧಮೃತಜಾತೋತ್ತರಾಸುತಂ ।
ಯೋಽಜೀವಯತ್ಪುನಸ್ತಸ್ಮೈ ಸರ್ವಶಕ್ತಾಯ ಮಂಗಳಂ ॥೩೪॥

### ಅನುವಾದ

ಅಶ್ವತ್ಥಾಮನ ಬ್ರಹ್ಮಾಸ್ತ್ರದ ಬೇಗೆಗೆ ಸಿಕ್ಕಿ ಹುಟ್ಟುವಾಗಲೇ ಸತ್ತುಹೋಗಿದ್ದ ಉತ್ತರೆಯ ಮಗನಾದ ಪರೀಕ್ಷಿತ್ತನ್ನು ಮತ್ತೆ ಬದುಕಿಸಿದ ಸರ್ವಶಕ್ತನಿಗೆ ಮಂಗಳವು !

## ಆಶ್ರಮವಾಸಿಕ, ಮೌಸಲ, ಮಹಾಪ್ರಸ್ಥಾನ, ಸ್ವರ್ಗಾರೋಹಣ ಪರ್ವಗಳು

ಸರ್ವಭೂಭಾರನಿರ್ಹರ್ತ್ರೇ ಹಿತ್ವಾಸ್ವಪರವೇಚನಂ।
ನಿರಂಕುಶಸ್ವತಂತ್ರಾಯ ತಸ್ಮೈಕೃಷ್ಣಾಯಮಂಗಳಂ ॥ ॥೩೫॥

### ಅನುವಾದ

ತನ್ನವರು, ಅನ್ಯರು ಎಂಬ ಪಕ್ಷಪಾತವಿಡದೆ ಭೂಮಿಗೆ ಭಾರವಾದ ಜನರನ್ನೆಲ್ಲಾ ಸಂಹಾರಮಾಡಿದ ನಿರಂಕುಶ ಸ್ವತಂತ್ರನಾದ ಆ ಕೃಷ್ಣನಿಗೆ ಮಂಗಳವು !

ಮಂಗಲಂ ಸೂರಿಸೇವ್ಯಾಯ ಶ್ರೀಭೂನೀಳಾವಿಹಾರಿಣೇ ।
ಪರಸ್ಮೈ ವಾಸುದೇವಾಯ ನಿತ್ಯಾನಂದಾಯ ಮಂಗಳಂ ॥ ॥ ೩೬ ॥

ಅನುವಾದ

ಶ್ರೀ ವೈಕುಂಠದಲ್ಲಿ ದಿವ್ಯಸೂರಿಗಳ ಸೇವೆಯನ್ನು ಕೈಗೊಳ್ಳುತ್ತಾ ಶ್ರೀ ಭೂನೀಳಾದೇವಿಯರೊಡನೆ ಸದಾ ಆನಂದದಿಂದ ವಿಹರಿಸುವ ಪರವಾಸುದೇವನಿಗೆ ಮಂಗಳವಾಗಲಿ !

## ನಿಗಮನಂ

ಬಾಲಧನ್ವಿಕುಲೋದ್ಭೂತ ಶಿಂಗರಾರ್ಯತನೂಭುವಾ ।
ಯದ್ವದ್ರಿ ನಿತ್ಯವಾಸೇನ ವೇಂಕಟಾರ್ಯೇಣ ಸಂಭೃತಂ॥ ॥ ೩೭ ॥
ಭಾರತಪ್ರತಿಪರ್ವಸ್ಥಸ್ವಕಥಾರಸಮೇದುರಂ ।
ಮಂಗಳಂಸ್ಯಾದಯಿತ್ರೇ ಚ ತಸ್ಮೈಕೃಷ್ಣಾಯಮಂಗಳಂ ॥ ॥ ೩೮ ॥

ಅನುವಾದ

ಯದುಗಿರಿಯಲ್ಲಿ ನಿತ್ಯವಾಸಮಾಡುವ, ಬಾಲಧನ್ವಿಕುಲದಲ್ಲಿ ಹುಟ್ಟಿದ ಶ್ರೀ ಶಿಂಗರಾರ್ಯರ ಮಕ್ಕಳಾದ, ವೇಂಕಟಾಚಾರ್ಯರಿಂದ ರಚಿಸಲ್ಪಟ್ಟ, ಭಾರತದ ಪ್ರತಿಯೊಂದು ಪರ್ವದ ಕಥಾರಸದಿಂದ ತುಂಬಿರುವ, ಈ ಮಂಗಲ ಪದ್ಯಬಂಧವನ್ನು ಸವಿಯುವಂತೆ ಅನುಗ್ರಹಿಸಿದ ಆ ಕೃಷ್ಣನಿಗೆ ಮಂಗಳವಾಗಲಿ!

ರಾಮಾನುಜಾರ್ಯಸೇವ್ಯಾಯ ನಿತ್ಯಂ ಯದ್ವದ್ರಿವಾಸಿನೇ ।
ಭಕ್ತಾನುಗ್ರಹದೀಕ್ಷಾಯ ಸಂಪತ್‌ಪುತ್ರಾಯ ಮಂಗಳಂ ॥ ॥ ೩೯ ॥

ಅನುವಾದ

ಭಕ್ತಾನುಗ್ರಹದೀಕ್ಷೆಯಿಂದ ನಿತ್ಯವಾಗಿ ಯದುಗಿರಿಯಲ್ಲಿ ನೆಲೆಗೊಂಡು ಶ್ರೀರಾಮಾನುಜರಿಂದ ಸೇವ್ಯನಾಗಿ ಸಂಪತ್ಪುತ್ರನೆನಿಸಿದ ಭಗವಂತನಿಗೆ ಮಂಗಳವು.

॥ ಶ್ರೀ ಕೃಷ್ಣಾಯನಮಃ ॥



ಶ್ರೀಶಾನುದಾಸ ಗ್ರನ್ಥಮಾಲಾ

ಗ್ರನ್ಥಮಾಲಾ ಪೋಷಕರು

## ಅನುಗ್ರಾಹಕರು

೧ ಶ್ರೀಮತ್ಪರಮಹಂಸೇತ್ಯಾದಿ ಶ್ರೀ ಅಹೋಬಲ ಮಠದ ಶ್ರೀ ಸ್ವಾಮಿಗಳವರು.

೨ ಶ್ರೀಮತ್ಪರಮಹಂಸೇತ್ಯಾದಿ ಪರ್ಯಾಯ ಶ್ರೀ ಅದಮಾರು ಮಠದ ಶ್ರೀ ಸ್ವಾಮಿಗಳವರು, ಉಡುಪಿ

೩ ಶ್ರೀಮತ್ಪರಮಹಂಸೇತ್ಯಾದಿ ಭಂಡಾರಕೇರಿ ಮಠದ ಶ್ರೀಪಾದಂಗಳವರು.

೪ ಶ್ರೀ ಯದುಗಿರಿ ಯತಿರಾಜ ಮಠದ ಶ್ರೀ ಸ್ವಾಮಿಗಳವರು.

## ಸಂರಕ್ಷಕರು

ಶ್ರೀಮಾನ್ ತಂಗ್ಲಿ ಸಾಹುಕಾರ್ ಮತ್ತು ಜಮೀನ್‌ದಾರ್ ಟಿ. ಎನ್. ಕೃಷ್ಣಸ್ವಾಮಿ ಐಯಂಗಾರ್ ಅವರು.

## ಪೋಷಕರು

೧ ಶ್ರೀ ಉಭಯವೇದಾನ್ತ ಪ್ರವರ್ತನ ಸಭಾ, ಮಲ್ಲೇಶ್ವರಂ, ಬೆಂಗಳೂರು.

೨ ದಿವಂಗತ ಶ್ರೀ ನಾಯಕ ಆನಂದಾಳ್ವಾರ್, ಐ.ಎ.ಸಿ.ಇ. ಅವರು.

೩ ದಿವಂಗತ ಶ್ರೀ ಧರ್ಮಸ್ಥಳದ ಮಂಜಯ್ಯ ಹೆಗ್ಗಡೆ, ಬಿ.ಎ. ಎಲ್.ಎಲ್.ಬಿ., ಅವರು.

೪ ಶ್ರೀಮಾನ್ ಕೆ. ಟಿ. ಅಪ್ಪಣ್ಣನವರು, ಮಲ್ಲೇಶ್ವರಂ, ಬೆಂಗಳೂರು.

೫ ಶ್ರೀಮಾನ್ ಓ. ಶ್ರೀನಿವಾಸನ್, ಜ್ಯೂಪಿಟರ್ ಪ್ರೆಸ್, ಬೆಂಗಳೂರು.

೬ ಶ್ರೀಮಾನ್ ವಾಲ್ಮೀಕಿ ರಾಮಾನುಜೈಯಂಗಾರ್ಯರು ಮತ್ತು ಶ್ರೀಮಾನ್ ವಾಲ್ಮೀಕಿ ಕೃಷ್ಣೈಯಂಗಾರ್ಯರು, ಮೈಸೂರು.

## ಶ್ರೀಶಾನುದಾಸ ಗ್ರನ್ಥಮಾಲಾ ಪ್ರಕಟಣೆಗಳು

೧ ಶ್ರೀ ಗೋದಾದೇವಿಯ "ತಿರುಪ್ಪಾವೈ" (ತಿದ್ದಿದ ಎರಡನೆಯ ಮುದ್ರಣ) "ಉತ್ತಮ ರೀತಿಯ ಕಾವ್ಯ, ಭಕ್ತಿ ಪ್ರತಿಪಾದಕ ಅತ್ಯುತ್ತಮ ಧರ್ಮ ಗ್ರಂಥ" [ಬೆಲೆ: ೧೨ ಆಣೆಗಳು—ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರ ಮುನ್ನುಡಿ [ಯಿಂದ.

೨ ತೊಂಡರಡಿಪ್ಪೊಡಿಯಾಳ್ವಾರರ "ತಿರುಮಾಲೈ" (ಪ್ರತಿಗಳು ಮುಗಿದಿವೆ).

೩ ಧರ್ಮದ ಮರ್ಮ (ನಾಲ್ಕು ಪ್ರಬಂಧಗಳು) ,,

೪ "ನಿತ್ಯಾನುಸನ್ಧಾನಂ" [ಶ್ರೀ ವೈಷ್ಣವರು ದೇವರ ಪೂಜೆಯ ಕಾಲದಲ್ಲಿ ಹಾಡುವ ತಮಿಳು ಗೀತೆಗಳು]. ,,

೫ ನಮ್ಮಾಳ್ವಾರರ "ತಿರುವಾಶಿರಿಯಂ" ,,

೬ ಶ್ರೀ ಗೋದಾದೇವಿಯ 'ನಾಯಕೀ ಗೀತೆ' (ಸಚಿತ್ರ) ತಮಿಳು ಮೂಲ, ಅನುವಾದ ಮತ್ತು ವಿಶೇಷಾರ್ಥಗಳೊಡನೆ. ಬೆಲೆ: ರೂ. ೧—೮—೦

ಗ್ರಂಥಮಾಲೆಯ ಅಭಿಮಾನಿಗಳಿಗೆ ರೂ. ೧—೪—೦

ಇವು ಮುಜರಾಯ್ ಕಮಿಷನರಿಂದ ಮೈಸೂರು ದೇಶದ ಎಲ್ಲಾ ವಿಷ್ಣು ಮಂದಿರಗಳಿಗೂ ಮಂಜೂರಾಗಿವೆ.

['ತಿರುಪ್ಪಾವೈ'—ಪಠ್ಯ ಪುಸ್ತಕ ಸಮಿತಿಯಿಂದ ಎಲ್ಲಾ ಹೈಸ್ಕೂಲ್, ನಾರ್ಮಲ್ ಸ್ಕೂಲ್ ಮತ್ತು ಪುಸ್ತಕ ಭಂಡಾರಗಳಿಗೂ ಮಂಜೂರಾಗಿದೆ.]

### ಬಿಡಿ ಮುತ್ತುಗಳು

ಸ್ತೋತ್ರಶಾಖೆ ೧—ಭಾರತಕೃಷ್ಣಮಂಗಳಂ ಬೆಲೆ: ೩ ಆಣೆ.

### ಪ್ರತಿಗಳು ಇಲ್ಲಿ ಸಿಕ್ಕುತ್ತವೆ:—

ಆ.ನ. ಶ್ರೀನಿವಾಸೈಯಂಗಾರ್, ಬಿ.ಎಸ್.ಸಿ., (ಆನರ್ಸ್)
ಮಲ್ಲೇಶ್ವರಂ ಪೋಸ್ಟ್
ಬೆಂಗಳೂರು-3.

ಆಯಂಗಾರ್ ನರಸಿಂಹಾಚಾರ್ ಶ್ರೀದೊಡ್ಡಾಚಾರ್ಯ ಬೀದಿ, ಮೇಲುಕೋಟೆ ಪೋಸ್ಟ್. ಮಂಡ್ಯ ಜಿಲ್ಲೆ